ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 17 ನೇ ಮಾರ್ಚ್, 2020

ಅಮೃತ ಯೋಜನೆಯಡಿ ನಡೆದ ಕಾಮಗಾರಿಗಳ ಕುರಿತು

ಶ್ರೀ ಆಯನೂರು ಮಂಜುನಾಥ್(ಪದವೀಧರರ ಕ್ಷೇತ್ರ):-

158 (1260) ಮಾನ್ಯ ನಗರಾಭಿವೃದ್ಧಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಶಿವಮೊಗ್ಗ ಮಹಾನಗರ ಪಾಲಿಕೆಯ 35 ವಾರ್ಡ್‌ಗಳಲ್ಲಿ ಎಲ್ಲೆಲ್ಲಿ ಯಾವ ಯಾವ ಕಾಮಗಾರಿಗಳನ್ನು ಅಮೃತ ಯೋಜನೆಯಡಿಯಲ್ಲಿ ಯಾವ ಯಾವ ಕಂಪನಿ/ಗುತ್ತಿಗೆದಾರರಿಂದ ನಡೆಸಲಾಗುತ್ತಿದೆ ; (ವಾರ್ಡುವಾರು ವಿವರ ನೀಡುವುದು)

(ಆ) ಮಹಾನಗರ ಪಾಲಿಕೆಯಲ್ಲಿ ಎಷ್ಟು ಕೆರೆಗಳಿವೆ ; ಮತ್ತು ಎಷ್ಟು ಕೆರೆಗಳನ್ನು ಮುಚ್ಚಲಾಗಿದೆ ; ಹಾಗೂ ಇರುವ ಕೆರೆಗಳ ಅಭಿವೃದ್ಧಿಗೆ ವಿನಿಯೋಗಿಸಿರುವ ಅನುದಾನವೆಷ್ಟು ; (ವಿವರ ನೀಡುವುದು)

(ಇ) ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಅಭಿವೃದ್ಧಿಯಾಗದೇ ಇರುವ ಕೆರೆಗಳೆಷ್ಟು;

(ಈ) ಶಿವಮೊಗ್ಗ ಮಹಾನಗರ ಪಾಲಿಕೆಯಲ್ಲಿ ಎಷ್ಟು ಪಾರ್ಕ್‌ಗಳಿವೆ ; ಕಳೆದ 3 ವರ್ಷಗಳಲ್ಲಿ ಪ್ರತಿ ವಾರ್ಡಿನಲ್ಲಿರುವ ಪಾರ್ಕ್ ಅಭಿವೃದ್ಧಿಪಡಿಸಲು ಮಾಡಿದ ವೆಚ್ಚಗಳೆಷ್ಟು ; ಸರ್ಕಾರದ ಯಾವ-ಯಾವ ಅನುದಾನದಲ್ಲಿ ಕಾಮಗಾರಿ ಕೈಗೆತ್ತಿಕೊಳ್ಳಲಾಗಿದೆ ; ಬಾಕಿ ಇರುವ ಕಾಮಗಾರಿಗಳೆಷ್ಟು ; (ಪೂರ್ಣ ವಿವರ ನೀಡುವುದು)

(ಉ) ಪಾರ್ಕ್ ಮತ್ತು ಕೆರೆಗಳ ಅಭಿವೃದ್ಧಿ ಕಾಮಗಾರಿ ಉಸ್ತುವಾರಿ ಇಂಜನೀಯರ್‌ಗಳು ಮತ್ತು ಅಭಿವೃದ್ಧಿಪಡಿಸಿದ ಮತ್ತು ಅಭಿವೃದ್ಧಿಪಡಿಸುತ್ತಿರುವ ಗುತ್ತಿಗೆದಾರರ ಹೆಸರು, ವಿಳಾಸದೊಂದಿಗೆ ವಿವರ ನೀಡುವುದು ?